# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 509

ಸದಸ್ಯರ ಹೆಸರು : ಶ್ರೀ ಎಂ ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 05-02-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ಸರ್ಕಾರವು ಈ ವರ್ಷದ ಮಹಾಮಾರಿ ಸಾಂಕ್ರಾಮಿಕ ರೋಗವಾದ ಕೋವಿಡ್-19ರ ಪ್ರಭಾವಕ್ಕೆ ಒಳಗಾಗಿ ಕಷ್ಟ ಅನುಭವಿಸುತ್ತಿರುವ ಆಟೋ ಮತ್ತು ಟ್ಯಾಕ್ಸಿ ಚಾಲಕರಿಗೆ ರೂ.5,000/- ಕನಿಷ್ಠ ಸಹಾಯ ಧನವನ್ನು ಘೋಷಿಸಿದ್ದು ಇದು ಸಾವಿರಾರು ಫಲಾನುಭವಿಗಳಿಗೆ ತಲುಪಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದರ. ಬಗ್ಗೆ ಕೈಗೊಂಡ ಕ್ರಮಗಳೇನು; | ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಟಿಡಿ 121 ಟಿಡಿಒ 2020, ದಿನಾಂಕ:16-05-2020 ಹಾಗೂ ಮಾರ್ಪಾಡು ಆದೇಶ ದಿನಾಂಕ: 29-05-2020 ರಲ್ಲಿ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಮಾತ್ರ ಒಮ್ಮೆ ಪರಿಹಾರವಾಗಿ ರೂ.5000/- ಗಳ ಪರಿಹಾರ ಧನವನ್ನು ಷರತ್ತುಗಳಿಗೊಳಪಟ್ಟು ನೀಡಲು ಮಂಜೂರಾತಿ ನೀಡಿ ಆದೇಶಿಸಲಾಗಿದೆ.<br><br>ಪರಿಹಾರ ಧನವು ಹಲವು ಫಲಾನುಭವಿಗಳಿಗೆ ತಲುಪಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>I.D validation ಅನುತ್ತೀರ್ಣ ತಾಂತ್ರಿಕ ಸಮಸ್ಯೆಯಿಂದ / ಫಲಾನುಭವಿಗಳ ಬ್ಯಾಂಕ್ ಖಾತೆಗಳು ಚಾಲ್ತಿಯಲ್ಲಿ ಇಲ್ಲದ ಕಾರಣ / ಬ್ಯಾಂಕ್ ಖಾತೆಗಳಿಗೆ ಆಧಾರ್ ಸಂಖ್ಯೆ ಜೋಡಣೆ ಆಗದಿರುವ ಕಾರಣ ಪರಿಹಾರ ಧನವನ್ನು ವಿತರಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ಬಾಕಿ ಉಳಿದಿರುವ ಅರ್ಜಿದಾರರಿಗೆ ಪರಿಹಾರ ಧನವನ್ನು ವಿತರಿಸುವ ಸಂಬಂಧ ಹೆಚ್ಚುವರಿ ಬ್ಯಾಂಕ್ ಖಾತೆಯ ಮಾಹಿತಿಗಳನ್ನು ದಾಖಲಿಸುವುದು ಅವಶ್ಯಕವಾಗಿದ್ದು, "ಸೇವಾ ಸಿಂಧು" ವೆಬ್ ಪೋರ್ಟಲ್‌ನಲ್ಲಿ ಹೆಚ್ಚುವರಿ ಬ್ಯಾಂಕ್ ಖಾತೆಯ ಮಾಹಿತಿಗಳನ್ನು ದಾಖಲಿಸುವ ಮೂಲಕ ಪರಿಹಾರ ಧನ ವಿತರಿಸಲು ಸಹಕರಿಸಬೇಕಾಗಿ ಕೋರಿ ಪತ್ರಿಕಾ ಪ್ರಕಟಣೆಯನ್ನು ಸಾರಿಗೆ ಇಲಾಖಾ ವತಿಯಿಂದ ಪ್ರಮುಖ ಪತ್ರಿಕೆಗಳಲ್ಲಿ ನೀಡಲಾಗಿರುತ್ತದೆ ಹಾಗೂ ಎಲ್ಲಾ ಅರ್ಜಿದಾರರಿಗೆ ಅವರ ಮೊಬೈಲ್‌ಗಳಿಗೆ ಹೆಚ್ಚುವರಿ ಬ್ಯಾಂಕ್ ಖಾತೆಗಳನ್ನು ಸೇವಾ ಸಿಂಧು ಪೋರ್ಟಲ್‌ನಲ್ಲಿ ದಾಖಲಿಸುವಂತೆ ಕೋರಿ ಎರಡು ಬಾರಿ ಸೇವಾ ಸಿಂಧು ಮೂಲಕ ದಿನಾಂಕ: 25-11-2020ರ ಗಡುವನ್ನು ನಿಗದಿಪಡಿಸಿ ಎಸ್.ಎಂ.ಎಸ್., ಮುಖಾಂತರ ಸಂದೇಶವನ್ನು ರವಾನಿಸಲಾಗಿರುತ್ತದೆ. ಅದಕ್ಕನುಗುಣವಾಗಿ ಸ್ವೀಕೃತವಾಗಿರುವ ಮಾಹಿತಿಯನ್ನು ಪರಿಶೀಲಿಸಿ ಪರಿಹಾರ ಧನ ವಿತರಿಸುವ ಕ್ರಮ ಚಾಲ್ತಿಯಲ್ಲಿರುತ್ತದೆ. |

| | | |
|---|---|---|
| ಆ | ಇಲ್ಲಿಯವರೆಗೆ ಎಷ್ಟು ಜನ ಫಲಾನುಭವಿಗಳಿಗೆ ಸಹಾಯಧನವನ್ನು ನೀಡಲಾಗಿದೆ; | ಸೇವಾ ಸಿಂಧು ವೆಬ್ ಪೋರ್ಟ್‌ಲ್‌ನಲ್ಲಿ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು ಪರಿಹಾರ ಧನ ಕೋರಿ ಸಲ್ಲಿಸಿರುವ ಫಲಾನುಭವಿಗಳ ಅರ್ಜಿಗಳ ಪೈಕಿ ಇಲ್ಲಿಯವರೆಗೆ 2,15,669 ಫಲಾನುಭವಿಗಳಿಗೆ ಪರಿಹಾರ ಧನವನ್ನು ವಿತರಿಸಲಾಗಿರುತ್ತದೆ. |
| ಇ | ಇದಕ್ಕಾಗಿ ಮೀಸಲಿಟ್ಟ ಒಟ್ಟು ಪ್ರಮಾಣ ಎಷ್ಟು; ಇಲ್ಲಿಯವರೆಗೆ ಹಂಚಿಕೆಯಾದ ಹಾಗೂ ಬಾಕಿ ಉಳಿಸಿಕೊಂಡಿರುವ ಹಣವೆಷ್ಟು; (ಜಿಲ್ಲಾವಾರು ಅಂಕಿಅಂಶಗಳ ಸಹಿತ ಸಂಪೂರ್ಣ ವಿವರಣೆಯನ್ನು ನೀಡುವುದು) | ಸಾರಿಗೆ ಇಲಾಖೆಗೆ ಸರ್ಕಾರದಿಂದ ಪರಿಹಾರ ಧನ ವಿತರಿಸುವ ಸಂಬಂಧ **ರೂ.117.51** ಕೋಟಿ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ,<br>ಸದರಿ ಅನುದಾನದಲ್ಲಿ ಇಲ್ಲಿಯವರೆಗೆ ರೂ. 107,83,45,000ಗಳನ್ನು ಹಂಚಿಕೆ ಮಾಡಲಾಗಿದ್ದು, ರೂ.1,31,50,000ಗಳ ಅನುದಾನ ವಿತರಿಸಿರುವುದು ಬಾಕಿ ಇರುತ್ತದೆ.<br>ಹಂಚಿಕೆಯಾದ ಹಾಗೂ ಬಾಕಿ ಇರುವ ಅನುದಾನದ ಜಿಲ್ಲಾವಾರು ವಿವರವನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ. |

ಟಿಡಿ 16 ಟಿಡಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ
ಪ್ರಶ್ನೆ ಸಂಖ್ಯೆ: 509 ಗೆ ಅನುಬಂಧ

| District | Total Applications Paid | Amount Paid | Total Applications pending | Amount yet to pay |
|---|---|---|---|---|
| BAGALKOT | 1522 | 7610000 | 21 | 105000 |
| BANGALORE RURAL | 4330 | 21650000 | 47 | 235000 |
| BELAGAVI | 4933 | 24665000 | 30 | 150000 |
| BELLARY | 2810 | 14050000 | 21 | 105000 |
| BENGALURU URBAN | 85041 | 425205000 | 1254 | 6270000 |
| BIDAR | 1420 | 7100000 | 9 | 45000 |
| BIJAPUR | 2789 | 13945000 | 18 | 90000 |
| CHAMARAJANAGAR | 1602 | 8010000 | 20 | 100000 |
| CHIKBALLAPUR | 2537 | 12685000 | 42 | 210000 |
| CHIKMAGALUR | 3533 | 17665000 | 22 | 110000 |
| CHITRADURGA | 4464 | 22320000 | 29 | 145000 |
| DAKSHINA KANNADA | 15387 | 76935000 | 176 | 880000 |
| DAVANGERE | 4542 | 22710000 | 28 | 140000 |
| DHARWAD | 3077 | 15385000 | 21 | 105000 |
| GADAG | 989 | 4945000 | 9 | 45000 |
| GULBARGA | 4893 | 24465000 | 42 | 210000 |
| HASSAN | 6575 | 32875000 | 76 | 380000 |
| HAVERI | 1706 | 8530000 | 15 | 75000 |
| KODAGU | 3214 | 16070000 | 26 | 130000 |
| KOLAR | 3201 | 16005000 | 29 | 145000 |
| KOPPAL | 1146 | 5730000 | 14 | 70000 |
| MANDYA | 7977 | 39885000 | 156 | 780000 |
| MYSORE | 13245 | 66225000 | 137 | 685000 |
| RAICHUR | 1617 | 8085000 | 12 | 60000 |
| RAMANAGARA | 4738 | 23690000 | 76 | 380000 |
| SHIMOGA | 4501 | 22505000 | 33 | 165000 |
| TUMKUR | 11195 | 55975000 | 136 | 680000 |
| UDUPI | 7205 | 36025000 | 69 | 345000 |
| UTTAR KANNADA | 4454 | 22270000 | 56 | 280000 |
| YADGIR | 1026 | 5130000 | 6 | 30000 |
| Total | 215669 | 1078345000 | 2630 | 13150000 |